


# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 161 (1131)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು )

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : ಕ್ರಿಯಾತ್ಮಕ ಗೃಹ ನೀರು ಪೂರೈಕೆ ಯೋಜನೆ

(ಅ) ಕೇಂದ್ರ ಸರ್ಕಾರದ ಜಲ-ಜೀವನ ಅಭಿಯಾನ ಅಡಿಯಲ್ಲಿ ರಾಜ್ಯದಲ್ಲಿ ಕುಡಿಯಲು ಯೋಗ್ಯವಾದ ಮತ್ತು ಗುಣಮಟ್ಟದ ನೀರಿನ ಲಭ್ಯತೆ ಬಗ್ಗೆ ಅಂಕಿ-ಅಂಶಗಳನ್ನು ಸಂಗ್ರಹಿಸಿದೆಯೇ ; (ವಿವರ ನೀಡುವುದು)

(ಆ) ರಾಜ್ಯದ ಎಲ್ಲಾ ಭಾಗಗಳಲ್ಲಿ ಕೇವಲ ಕುಡಿಯಲು ನೀರು ಒದಗಿಸುವ ದೃಷ್ಟಿಯಲ್ಲದೆ ಸಾರ್ವಜನಿಕರ ಆರೋಗ್ಯದ ದೃಷ್ಟಿಯಿಂದಲೂ ಮತ್ತು ವಿವಿಧ ರೀತಿಯ ಸಾಂಕ್ರಾಮಿಕ ರೋಗಗಳು ಹರಡುವಿಕೆ ತಡೆಯುವ ಹಿನ್ನಲೆಯಲ್ಲಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳಾವುವು ; (ಯೋಜನೆಗಳ ವಿವರಗಳನ್ನು ಅನುಷ್ಠಾನ ಒಳಗೊಂಡಂತೆ ನೀಡುವುದು)

(ಇ) ಜಲ-ಜೀವನ ಅಭಿಯಾನದಡಿಯಲ್ಲಿ ಕ್ರಿಯಾತ್ಮಕ ಗೃಹ ನೀರು ಪೂರೈಕೆ ಯೋಜನೆ (Functional Household Tap Connection-FHTC) ಅಡಿ ಗ್ರಾಮಾಂತರದ ಪ್ರತಿಯೊಂದು ಮನೆಗಳಿಗೂ ಕುಡಿಯುವ ನೀರು ಪೂರೈಕೆ ಯೋಜನೆಯನ್ನು ರಾಜ್ಯ ಸರ್ಕಾರ ಅನುಷ್ಠಾನಗೊಳಿಸುತ್ತಿದೆಯೇ; (ವಿವರ ನೀಡುವುದು)

(ಈ) ಜಲ-ಜೀವನ ಅಭಿಯಾನ ಅಡಿಯಲ್ಲಿ ಕೇಂದ್ರ ಸರ್ಕಾರ ಸಾದರಪಡಿಸಿರುವ ICT Grand Challenge ಯೋಜನೆ ಅನ್ವಯ ನವೀನ (Innovative), ಮಾಡ್ಯುಲರ್ (Modular) ಮತ್ತು ಆರ್ಥಿಕವಾಗಿ ಸದೃಢವಾಗಿರುವ (Cost effective) ಕಿರು ನೀರು ಯೋಜನೆ, ಗ್ರಾಮ ಮಟ್ಟದಲ್ಲಿ ಉತ್ತಮ ವ್ಯವಸ್ಥೆ ಮತ್ತು ನಿರ್ವಹಣೆ ಮಾಡಲು ಸರ್ಕಾರ ಕೈಗೊಂಡಿರುವ ಕಾರ್ಯಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು)